# ನನ್ನ ಹೊಸ ಶಾಲೆಯ ಅನುಭವ

ವನ್ಯಾ ಗುಪ್ತ

ಕೋವಿಡ್ ಸಾಂಕ್ರಾಮಿಕದ ಕಾರಣದಿಂದಾಗಿ ನಾವು ಈಗ ಆನ್‌ಲೈನ್ ತರಗತಿಗಳಿಗೆ ವರ್ಗಾವಣೆಗೊಂಡಿದ್ದೇವೆ. ಆನ್‌ಲೈನ್ ತರಗತಿಗಳು ಸಾಮಾನ್ಯ ಶಾಲೆಗಿಂತ ಶ್ರೇಷ್ಠವೋ ಕನಿಷ್ಠವೋ ಎನ್ನುವುದಕ್ಕಿಂತಲೂ ಅದೊಂದು ವಿಭಿನ್ನ ವ್ಯವಸ್ಥೆಯಾಗಿದ್ದು, ಕೆಲವು ವಿಷಯಗಳಲ್ಲಿ ಪ್ರಯೋಜನಕಾರಿಯೂ, ಇನ್ನು ಕೆಲವು ವಿಚಾರಗಳಲ್ಲಿ ಹಾನಿ-ಕಾರಕವೂ ಆಗಿವೆ.

ಇದರ ಮೊದಲ ಪ್ರಯೋಜನ ಎಂದರೆ, ಅಧ್ಯಾಪಕರು ನಡೆಸುವ ಆನ್‌ಲೈನ್ ತರಗತಿಯ ಟಿಪ್ಪಣಿಗಳು ಮತ್ತು ಅಧ್ಯಾಪಕರು ಹಂಚಿಕೊಳ್ಳುವ ಅಧ್ಯಾಯಗಳ ಹೆಚ್ಚುವರಿ ಅಭ್ಯಾಸದ ಮಾಹಿತಿಗಳು ನಮಗೆ ಸಿಗುತ್ತವೆ. ಹೀಗಾಗಿ ನಮ್ಮ ನೋಟ್ಸ್ ಪುಸ್ತಕಗಳಲ್ಲಿ / ರಿಜಿಸ್ಟರ್‌ಗಳಲ್ಲಿ ಉದ್ದುದ್ದ ಟಿಪ್ಪಣಿಗಳನ್ನು ಮಾಡಬೇಕಾಗಿಲ್ಲದ್ದರಿಂದ, ನಮಗೆ ಸಹಾಯ ಆದಂತಾಗುತ್ತದೆ. ಇಲ್ಲಿ ನಾವು ಮುಖ್ಯ ಅಂಶಗಳನ್ನು ನೋಡಿ, ಅಧ್ಯಾಪಕರು ನಮಗೆ ನೀಡುವ ಸರಳವಾದ ವಿವರಗಳನ್ನು ಗಮನಿಸಿಕೊಂಡರಾಯಿತು. ಇದರಿಂದ ಹೆಚ್ಚು ಸಮಯ ಸಿಗುವುದರಿಂದ ಸ್ವಯಂ ಕಲಿಕೆಗೆ ಮಹತ್ವ ನೀಡುವ ವಿದ್ಯಾರ್ಥಿಗಳಿಗೆ ಇದು ಸಹಕಾರಿಯಾಗಿದೆ. ನಮಗೆ ಹೆಚ್ಚು ಸಮಯ ಸಿಗುತ್ತದೆ. ಅಲ್ಲದೇ ನಾವು ನಮ್ಮ ಪಠ್ಯಕ್ರಮದ ಜೊತೆಗೆ ಸಂಪೂರ್ಣ ಸಂಪರ್ಕದಲ್ಲಿರುತ್ತೇವೆ. ಇದು ಹೆಚ್ಚು ಪ್ರಯೋಜನಕಾರಿ ಮತ್ತು ಅನುಕೂಲಕಾರಿಯಾಗಿದ್ದು, ಲಾಕ್‌ಡೌನ್ ಹೊತ್ತಲ್ಲಿ ಆನ್‌ಲೈನ್ ತರಗತಿ ನಡೆಸದಿದ್ದರೆ ನಮಗೆ ಅಧ್ಯಯನ ಮಾಡುವುದು ಸಾಧ್ಯವಿರುತ್ತಿರಲಿಲ್ಲ. ಅಥವಾ ನಮ್ಮ ಪಠ್ಯಕ್ರಮ ಮುಗಿಸುವುದಕ್ಕಾಗಲೀ, ಯಾವುದನ್ನಾದರೂ ಓದುವುದಕ್ಕಾಗಲೀ ಸಾಧ್ಯವಾಗುತ್ತಿರಲಿಲ್ಲ.

ಮನೆಯಿಂದ ಶಾಲೆಗೆ ಪ್ರಯಾಣದ ಅವಧಿ ಕಡಿಮೆಯಾದ್ದರಿಂದ ನಾವು ನಮ್ಮ ಉಳಿದ ಕೆಲಸಗಳಲ್ಲಿ ತೊಡಗಿಕೊಳ್ಳುವುದಕ್ಕೆ ಸಾಧ್ಯವಾಗುತ್ತದೆ. ಇದೆಲ್ಲಕ್ಕಿಂತ ಮಹತ್ವದ್ದು ಎಂದರೆ, ನಾವು ನಮ್ಮ ಕೆಲಸವನ್ನ ಸಮಯಕ್ಕೆ ಸರಿಯಾಗಿ ಮುಗಿಸದಿದ್ದರೆ, ಅಧ್ಯಾಪಕರು ನಮ್ಮನ್ನು ದಂಡಿಸುವುದಕ್ಕೆ ಆಗುವುದಿಲ್ಲ!

ಇದರ ಬಾಧಕಗಳನ್ನು ಗಮನಿಸಿದರೆ, ಇಂತಹ ಶಿಕ್ಷಣ ವ್ಯವಸ್ಥೆಗೆ ಹೊಂದಿಕೊಳ್ಳುವುದಕ್ಕೆ ಅನೇಕ ಅಧ್ಯಾಪಕರಿಗೆ ಸಾಧ್ಯವಾಗದೇ ತೊಂದರೆ ಅನುಭವಿಸಿದ್ದಾರೆ. ಅವರು ಹೊಸ ಗ್ಯಾಜೆಟ್‌ಗಳನ್ನು ಬಳಸುವಲ್ಲಿ, ತಮ್ಮ ಲ್ಯಾಪ್‌ಟಾಪ್ ಮತ್ತು ಫೋನ್‌ಗಳನ್ನು ವ್ಯವಸ್ಥೆಗೊಳಿಸುವಲ್ಲಿ ಸಮಸ್ಯೆಗಳನ್ನು ಅನುಭವಿಸಿದ್ದಾರೆ. ಉದಾಹರಣೆಗೆ ಅಧ್ಯಾಪಕರೊಬ್ಬರು ಕಾಗದದ ತುಂಡೊಂದರಲ್ಲಿ ಬರೆಯುತ್ತಿರುವಾಗ ಕೈಯಲ್ಲಿ ಫೋನ್ ಹಿಡಿದುಕೊಂಡೇ ಇದ್ದರು. ಇದರಿಂದ ಅವರು ಏನು ಬರೆದರು ಎನ್ನುವುದು ಸ್ಪಷ್ಟವಾಗಲೇ ಇಲ್ಲ. ಕೆಲವು ವಿದ್ಯಾರ್ಥಿಗಳು ಸಮಯ ವಿಳಂಬ, ಸ್ಥಗಿತಗೊಂಡ ಸ್ಕ್ರೀನ್‌ಗಳು, ಇದ್ದಕ್ಕಿದಂತೆ ಸಂಪರ್ಕ ಕಡಿತಗೊಳ್ಳುವ ಸಮಸ್ಯೆ ಇತ್ಯಾದಿ ನೆಟ್‌ವರ್ಕ್ ಸಮಸ್ಯೆ ಅನುಭವಿಸಿದರು.

ಆನ್‌ಲೈನ್ ತರಗತಿಯ ಇನ್ನೊಂದು ಅಪಾಯ ಎಂದರೆ ಎಲೆಕ್ಟ್ರಾನಿಕ್ ಉಪಕರಣಗಳಿಗೆ ನಾವು ಅತಿಯಾಗಿ ತೆರೆದು-ಕೊಳ್ಳುವುದೇ ಆಗಿದೆ. ದಿನವಿಡೀ ಲ್ಯಾಪ್‌ಟಾಪ್ ಮುಂದೆ ಕುಳಿತು ತರಗತಿಗೆ ಹಾಜರಾಗುತ್ತಾ, ಅನೇಕ ಯೋಜನಾಕಾರ್ಯಗಳನ್ನು ಬರೆಯುತ್ತಾ, ವರ್ಡ್ ಡಾಕ್ಯುಮೆಂಟ್‌ಗಳಲ್ಲಿ ಮನೆಗೆಲಸಗಳನ್ನು ಮಾಡುತ್ತಿರುತ್ತೇವೆ. ಇತರ ಟ್ಯೂಷನ್‌ಗಳಿಗೂ ಆನ್‌ಲೈನ್‌ನಲ್ಲೇ ಹಾಜರಾಗುತ್ತೇವೆ. ಇದು ನಮ್ಮ ಮಾನಸಿಕ ಮತ್ತು ದೈಹಿಕ ಆರೋಗ್ಯದ ಮೇಲೆ ದುಷ್ಪರಿಣಾಮ ಬೀರುತ್ತದೆ. ನಾವು ಕುಳಿತುಕೊಳ್ಳುವ ಭಂಗಿ ಮೇಲೆ, ನಮ್ಮ ಕಣ್ಣಿನ ದೃಷ್ಟಿ ಮೇಲೆ ಪರಿಣಾಮ ಬೀರುತ್ತದೆ.

ಸದಾ ಮನೆಯಲ್ಲೇ ಇರುವುದರಿಂದ ನಮಗೆ ಸಾಕಷ್ಟು ಸಮಯಾವಕಾಶ ಇರುತ್ತದೆ ಎಂದು ಅಧ್ಯಾಪಕರು ಭಾವಿಸುತ್ತಾರೆ. ಹಾಗಾಗಿಯೇ ಅವರು ನಮಗೆ ಹೆಚ್ಚು ಹೆಚ್ಚು ಮನೆಗೆಲಸ ಕೊಡುತ್ತಾರೆ. ಕೆಲವೊಮ್ಮೆ ಶಾಲೆಯಲ್ಲಿ ಸಿಗುವುದಕ್ಕಿಂತ ಎರಡು ಪಟ್ಟು ಮನೆಗೆಲಸ ಇಲ್ಲಿ ಪಡೆಯುತ್ತೇವೆ. ಶಾಲೆಯಲ್ಲಿ ಇದ್ದಾಗ ನಮಗೆ ಅದೇ ಮನೆಗೆಲಸ ಹೆಚ್ಚಾಗಿ ಕಾಣಿಸುತ್ತಿತ್ತು. ಇದರ ಹೊರತಾಗಿ, ನಮಗೆ ಟ್ಯೂಷನ್‌ನಿಂದಲೂ ಹೆಚ್ಚುವರಿ ಮನೆಗೆಲಸವಿರುತ್ತದೆ. ಕೆಲವು ವಿದ್ಯಾರ್ಥಿಗಳು ಆಕಾಶ್ ಮತ್ತು ವಿದ್ಯಾಮಂದಿರ (ವಿ.ಎಮ್.ಸಿ) ದಂಥ ಖಾಸಗಿ ಸಂಸ್ಥೆಗಳ ತರಗತಿಗಳಿಗೂ ಸೇರಿಕೊಂಡಿರುತ್ತಾರೆ. ಅಲ್ಲಿ ಅವರಿಗೆ ನಾಲ್ಕು ಗಂಟೆಗಳ ತರಗತಿ ಇರುತ್ತದೆ. ಇದೆಲ್ಲ ಹೆಚ್ಚಿನ ಸಮಯ ತೆಗೆದುಕೊಳ್ಳುತ್ತದೆ. ಇದರಿಂದಾಗಿ ಶಾಲೆ ಮತ್ತು ಮನೆಪಾಠದ ಪರೀಕ್ಷೆಗಳಿಗೆ ತಯಾರಾಗಬೇಕಾದ ಒತ್ತಡಕ್ಕೆ ಒಳಗಾಗುತ್ತೇವೆ. ಅಧ್ಯಾಪಕರು ನಮ್ಮ ಪರೀಕ್ಷೆಗಳಿಗೆ ಅನುಗುಣವಾಗಿ ಮನೆಗೆಲಸಗಳಲ್ಲಿ ಹೊಂದಾಣಿಕೆ ಮಾಡುವರು ಮತ್ತು ನಮ್ಮ ಕೆಲಸದ ಪ್ರಮಾಣವನ್ನು ಕಡಿಮೆ ಮಾಡುವರು ಎಂದು ನಾವು ಆಶಿಸುತ್ತೇವೆ.

ಹೌದು, ನಿಜವಾಗಿಯೂ ಪರೀಕ್ಷೆಗಾಗಿ ನಮ್ಮ ಪಠ್ಯಕ್ರಮದಲ್ಲಿ ಕಡಿತ ಮಾಡಲಾಗಿದೆ. ಕೇವಲ ಅತ್ಯಂತ ಕಿರುಪ್ರಶ್ನೆಗಳು ಅಥವಾ ಬಹು ಆಯ್ಕೆಯ ಪ್ರಶ್ನೆಗಳನ್ನು (Multiple-Choice Questions-MCQ) ಕೇಳುತ್ತಿದ್ದಾರೆ. ಹೀಗಾಗಿ ಹೆಚ್ಚಿನ ಅರ್ಥೈಸುವಿಕೆಗೆ ಪರೀಕ್ಷೆಗಳಲ್ಲದ ಕಾರಣ ಮೂಲಭೂತವಾಗಿರುವಂಥ ವಿಚಾರಗಳನ್ನು ಒಳಗೊಂಡ ಅತ್ಯಂತ ಮುಖ್ಯ ಅಧ್ಯಾಯಗಳನ್ನೋ, ಪಾಠಗಳನ್ನೋ ಗ್ರಹಿಸುವುದಕ್ಕೆ ಸಾಧ್ಯವಾಗುತ್ತಿಲ್ಲ. ನಾವು ಕೇವಲ ಸರಳ ಪಾಠಗಳನ್ನಷ್ಟೇ ಕಲಿಯುತ್ತೇವೆ. ಅಂತಹ ಪಾಠಗಳಿಂದ ಪರೀಕ್ಷೆಗೆ ಸರಳ ಪ್ರಶ್ನೆ ಕೇಳುವುದಕ್ಕೆ ಆಗುತ್ತದೆ. ನಾವು ಸರಳ ಪ್ರಶ್ನೆಗಳಿಗೆ ಮತ್ತು ಬಹು ಆಯ್ಕೆ ಪ್ರಶ್ನೆಗಳಿಗೆ ಮಾತ್ರ ಉತ್ತರಿಸುವ ಮನಸ್ಥಿತಿಗೆ ಹೊಂದಿಕೊಳ್ಳುತ್ತಾ, ಉನ್ನತ ಶಿಕ್ಷಣದಲ್ಲಿ ದೀರ್ಘ ಪ್ರಶ್ನೆಗಳಿಗೆ ಉತ್ತರಿಸುವುದು ಸಾಧ್ಯವಾಗದೇ ಹೋಗಬಹುದು ಅನ್ನಿಸುತ್ತದೆ.

ಇನ್ನೊಂದು ಅಪಾಯ ಏನೆಂದರೆ, ಅನೇಕ ವಿದ್ಯಾರ್ಥಿಗಳು ತಮ್ಮ ತರಗತಿಗಳನ್ನು ಗಮನವಿಟ್ಟು ಕೇಳುವುದೇ ಇಲ್ಲ. ಅಧ್ಯಾಪಕರು ಹೇಳಿದಾಗ ವಿಡಿಯೋ ಆನ್ ಮಾಡುವುದೇ ಇಲ್ಲ. ಯಾಕೆಂದರೆ

ವಿದ್ಯಾರ್ಥಿಗಳು ಇದು ಆರಾಮವಾಗಿರಲು ಇರುವ ಸೂಕ್ತ ಸಮಯ ಎಂದು ಭಾವಿಸಿಕೊಂಡಿರುತ್ತಾರೆ. ಹೀಗಾಗಿ ಅಧ್ಯಾಪಕರಿಗೆ ವಿದ್ಯಾರ್ಥಿಗಳು ಗಮನ ನೀಡುತ್ತಿದ್ದಾರೆಯೇ ಅಥವಾ ಇಲ್ಲವೇ ಎಂದು ತಿಳಿದುಕೂಳ್ಳಲು ಸಾಧ್ಯವಾಗುತ್ತಿಲ್ಲ. ತರಗತಿಯೊಳಗೆ ಹೇಗೆ ಮತ್ತು ಯಾರು ಆಲಿಸುತ್ತಿದ್ದಾರೆ ಎನ್ನುವುದು ಅಧ್ಯಾಪಕರಿಗೆ ಗೊತ್ತಾಗುತ್ತಿತ್ತು. ಈಗ ತರಗತಿಗಳು ಸಂವಾದ ರಹಿತವಾಗಿರುತ್ತವೆ. ಮೌನವಾಗಿರುವ ಪರದೆ ಮುಂದೆ, ಯಾರೂ ಉತ್ತರಿಸದೇ ಇರುವ ಸ್ಥಿತಿಯಲ್ಲಿ ತಾವು ಪಾಠ ಮಾಡುತ್ತಾ ಇದ್ದೇವೆ ಎಂದು ಅಧ್ಯಾಪಕರು ದೂರುತ್ತಾರೆ.

ಒಟ್ಟಿನಲ್ಲಿ ನನ್ನ ಒಳನೋಟಗಳ ಪ್ರಕಾರ, ಈ ಆನ್‌ಲೈನ್‌ನಲ್ಲಿ ಪ್ರಯೋಜನಕಾರಿ ಅಂಶಗಳಿಗಿಂತ ಅಪಾಯಕಾರಿ ಅಂಶಗಳೇ ಹೆಚ್ಚಾಗಿವೆ. ನಾನು ಶಾಲೆಯನ್ನು ಇಷ್ಟಪಡುತ್ತೇನೆ ಮತ್ತು ಕಲಿಕೆಯ ಖುಷಿಯನ್ನು ಅನುಭವಿಸುತ್ತೇನೆ. ಈ ಸಮಸ್ಯೆ ಪರಿಹಾರ ಕಾಣುತ್ತದೆ ಎಂದು ಭಾವಿಸುತ್ತೇನೆ. ನಾನು ನಮ್ಮ ಸಾಮಾನ್ಯ ಶಾಲೆಗೆ ವಾಪಾಸ್ ತೆರಳಲು ಕಾತರಳಾಗಿದ್ದೇನೆ.



**ವನ್ಯಾ ಗುಪ್ತ** ನೋಯ್ಡಾದಲ್ಲಿ ಇರುವ ದೆಹಲಿ ಪಬ್ಲಿಕ್ ಶಾಲೆಯಲ್ಲಿ 9ನೇ ತರಗತಿ ವಿದ್ಯಾರ್ಥಿನಿ. ಆಕೆ ತನ್ನ ಶಾಲೆಯ ನಾಟಕ ಕ್ಲಬ್ ಮತ್ತು ಪಾಶ್ಚಾತ್ಯ ಸಂಗೀತದ ಕ್ಲಬ್‌ನ ಸದಸ್ಯೆ ಕೂಡಾ ಆಗಿದ್ದಾಳೆ. ವನ್ಯಾ ಗುಪ್ತಾರನ್ನು vanyagupta0707@gmail.com ಮೂಲಕ ಸಂಪರ್ಕಿಸಬಹುದು.

ಅನುವಾದ: **ಬಾಲಕೃಷ್ಣ ಹೊಸಂಗಡಿ** । ಪರಿಶೀಲನೆ: **ನಾಗಮಣಿ**

**ಶ್ರೀಮಂತ ಅಥವಾ ಅಭಿವೃದ್ಧಿಶೀಲ ಸಮಾಜವೇ ಆಗಿರಲಿ, ಈ ಸಾಂಕ್ರಾಮಿಕಕ್ಕೆ ಮುನ್ನ ತಮ್ಮ ಶಾಲಾ ಶಿಕ್ಷಣವನ್ನು ಸಂಪೂರ್ಣವಾಗಿ ತಂತ್ರಜ್ಞಾನ ಆಧಾರಿತ ವ್ಯವಸ್ಥೆಯತ್ತ ಕೊಂಡೊಯ್ದಿರಲಿಲ್ಲ. ಶಿಕ್ಷಣದಲ್ಲಿ ತಂತ್ರಜ್ಞಾನ ಬಳಸುವ ಕುರಿತು ಪ್ರಬುದ್ಧ ಶಿಕ್ಷಣ ವ್ಯವಸ್ಥೆಗಳು ಯಾವ ರೀತಿ ಯೋಚಿಸುತ್ತವೆ ಎನ್ನುವುದಕ್ಕೆ ಇದು ಸ್ಪಷ್ಟ ಸೂಚನೆಯಾಗಿದೆ.**

**– ಬಿ.ಎಸ್.ರಿಷಿಕೇಶ್, ಹೊಸ ಸಹಜತೆಯನ್ನು ಪ್ರಶ್ನಿಸುವುದು । ಅಂತರ್ಜಾಲ ಕಲಿಕೆ, ಪುಟ–25.**